

## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 575 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಪಿ. ಆರ್. ರಮೇಶ್ |
| 3) | ಉತ್ತರಿಸಬೇಕಾದ ದಿನಾಂಕ | 09-03-2020 |
| 4) | ಉತ್ತರಿಸುವವರು | ಮಾನ್ಯ ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ, ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |

| ಪ್ರಶ್ನೆ | ಉತ್ತರ |
|---|---|
| (ಅ) ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯಲ್ಲಿ ನಿರುದ್ಯೋಗಿಗಳು ಮತ್ತು ಮಹಿಳೆಯರಿಗಾಗಿ ಸರ್ಕಾರವು ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆಯೇ; | ಹೌದು |
| (ಆ) ಹಮ್ಮಿಕೊಂಡಿದಲ್ಲಿ, ಯಾವ ಯಾವ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ ಹಾಗೂ ಎಷ್ಟು ಅನುದಾನವನ್ನು ನಿಗಧಿಪಡಿಸಲಾಗಿದೆ; | ವಿವಿಧ ಸಂಸ್ಥೆಗಳಿಂದ ಹಮ್ಮಿಕೊಂಡಿರುವ ಯೋಜನೆಗಳ ವಿವರ ಕೆಳಕಂಡಂತಿದೆ. |

**1) ಕೌಶಲ್ಯ ಮಿಷನ್**

- ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ (ಸಿಎಂಕೆಕೆವೈ)
- ಪ್ರಧಾನ ಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆಗಳನ್ನು (ಪಿಎಂಕೆವಿವೈ) ಹಮ್ಮಿಕೊಳ್ಳಲಾಗಿದೆ.

ನಿಗಧಿಪಡಿಸಿರುವ ಅನುದಾನ (ಲಕ್ಷಗಳಲ್ಲಿ)

| | | |
|---|---|---|
| 2019-20 | ಸಿಎಂಕೆವಿವೈ ಯೋಜನೆಗೆ | 7339.25 |
| | ಪಿಎಂಕೆವಿವೈ ಯೋಜನೆಗೆ | 1000.00 |

**2) ದೀನ್‌ದಯಾಳ್ ಉಪಾಧ್ಯಾಯ ನಗರ ಜೀವನೋಪಾಯ ಯೋಜನೆ (ಡೇ-ನಲ್ಮ್)**

(ಲಕ್ಷ ರೂ.ಗಳಲ್ಲಿ)

| | | |
|---|---|---|
| 2019-20ನೇ ಸಾಲಿಗೆ | ಕೇಂದ್ರ ಸರ್ಕಾರದ ಪಾಲು ಶೇ.60ರಷ್ಟು | ರೂ.5800.00 |
| | ರಾಜ್ಯದ ಪಾಲು ಶೇ.40ರಷ್ಟು | ರೂ.3866.41 |

**3) ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (ಎನ್‌ಆರ್‌ಎಲ್‌ಎಂ)**

(ಲಕ್ಷ ರೂ.ಗಳಲ್ಲಿ)

| | | |
|---|---|---|
| 2019-20ನೇ ಸಾಲಿಗೆ | ಕೇಂದ್ರ ಸರ್ಕಾರದ ಪಾಲು ಶೇ.60ರಷ್ಟು | ರೂ.28674.00 |
| | ರಾಜ್ಯದ ಪಾಲು ಶೇ.40ರಷ್ಟು | ರೂ.19116.00 |

| | |
|---|---|
| | 4) **ಉದ್ಯಮಶೀಲತಾಭಿವೃದ್ಧಿ ಕೇಂದ್ರ (ಸಿಡಾಕ್)**<br><br>ಸಿಡಾಕ್ ಸಂಸ್ಥೆಯಿಂದ ಉದ್ಯಮಶೀಲತಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ರೂ. 244.00 ಲಕ್ಷಗಳ ಅನುದಾನವನ್ನು ನಿಗದಿಪಡಿಸಲಾಗಿದೆ. |
| (ಇ) ಈ ಯೋಜನೆಗಳಿಂದಾಗಿ ರಾಜ್ಯದಲ್ಲಿ ನಿರುದ್ಯೋಗ ಸಮಸ್ಯೆ ನಿವಾರಣೆಗೆ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ? (ವಿವರ ನೀಡುವುದು) | 1) **ಕೌಶಲ್ಯ ಮಿಷನ್**<br>• ನಿರುದ್ಯೋಗ ಸಮಸ್ಯೆ ನಿವಾರಣೆಗೆ www.kaushalkar.com ಎಂಬ ಜಾಲತಾಣವನ್ನು ಸ್ಥಾಪಿಸಲಾಗಿದೆ. ಸದರಿ ಜಾಲತಾಣದಲ್ಲಿ ನಿರುದ್ಯೋಗಿ ಯುವಕ-ಯುವತಿಯರಿಗೆ ಅವರು ಬಯಸುವ ವೃತ್ತಿಯಲ್ಲಿ ಅಲ್ಪಾವಧಿ ಕೌಶಲ್ಯ ತರಬೇತಿ ಪಡೆಯಲು ನೊಂದಣಿ ಮಾಡಿಕೊಳ್ಳುವ ಅವಕಾಶವಿದೆ. ಇದುವರೆಗೆ ಈ ಜಾಲತಾಣದಲ್ಲಿ 10 ಲಕ್ಷಕ್ಕಿಂತ ಹೆಚ್ಚು ಯುವಕ-ಯುವತಿಯರು ನೊಂದಾಯಿಸಿಕೊಂಡಿರುತ್ತಾರೆ. ಇದಲ್ಲದೆ ಇದುವರೆಗೆ 422 ತರಬೇತುದಾರ ಸಂಸ್ಥೆಗಳು ಈ ಜಾಲತಾಣದಲ್ಲಿ ನೊಂದಾಯಿಸಿ, ಮಾನ್ಯತೆ ಪಡೆದಿರುತ್ತವೆ. ತರಬೇತಿಯನ್ನು ಮಾನ್ಯತೆ ಪಡೆದ ತರಬೇತುದಾರ ಸಂಸ್ಥೆಗಳ ಮೂಲಕವೆ ಕೈಗೊಳ್ಳಬೇಕಾಗಿದೆ.<br>• ಜಿಲ್ಲಾ ಮಟ್ಟದಲ್ಲಿ ಸರ್ಕಾರದ ವತಿಯಿಂದ ಮಿನಿ ಹಾಗೂ ಬೃಹತ್ ಉದ್ಯೋಗ ಮೇಳಗಳನ್ನು ಆಯೋಜಿಸಿ ಉದ್ಯೋಗದಾತರನ್ನು ಉದ್ಯೋಗ ಮೇಳಕ್ಕೆ ಆಹ್ವಾನಿಸಿ ತರಬೇತಿ ಪಡೆದ ವೃತ್ತಿಗಳಿನುಗುಣವಾಗಿ ಉದ್ಯೋಗ ಪಡೆಯಲು ಅವಕಾಶ ಮಾಡಿಕೊಡಲಾಗಿದೆ.<br><br>**2) ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನ (ಡೇ-ನಲ್ಮ್)**<br><br>ಡೇ-ನಲ್ಮ್ ಅಭಿಯಾನದಡಿ ನಿರುದ್ಯೋಗ ಸಮಸ್ಯೆ ನಿವಾರಣೆಗೆ ಈ ಕೆಳಕಂಡಂತೆ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br><br>• **ಸಾಮಾಜಿಕ ಕ್ರೋಡೀಕರಣ ಮತ್ತು ಸಾಂಸ್ಥಿಕ ಅಭಿವೃದ್ಧಿ ಉಪ ಘಟಕದಡಿ:** ಮಹಿಳಾ ಸ್ವ ಸಹಾಯ ಸಂಘಗಳನ್ನು ರಚಿಸಿ, ಅವುಗಳು ಆರ್ಥಿಕ ಚಟುವಟಿಕೆ ಕೈಗೊಳ್ಳುವಂತೆ ಉತ್ತೇಜಿಸಲು ರೂ.10,000/- ಹಾಗೂ ಪ್ರದೇಶ ಮಟ್ಟದ ಒಕ್ಕೂಟಗಳಿಗೆ ರೂ.50,000/-ಗಳ ಆವರ್ತಕ ನಿಧಿಯನ್ನು ನೀಡಲಾಗುತ್ತಿದೆ.<br>• **ಸ್ವ-ಸಹಾಯ ಸಂಘಗಳಿಗೆ** ಬ್ಯಾಂಕುಗಳಿಂದ ರೂ.1,00,000/-ದವರೆಗೆ ಸಾಲ ಮತ್ತು ಶೇ.7ಕ್ಕಿಂತ ಮೇಲ್ಪಟ್ಟ ಬಡ್ಡಿಗೆ ಬಡ್ಡಿ ಸಹಾಯಧನ ವಿತರಣೆ ಹಾಗೂ ನಿಯಮಿತವಾಗಿ ಸಾಲ ಮರುಪಾವತಿಸುವ ಸ್ವ ಸಹಾಯ ಸಂಘಗಳಿಗೆ ಶೇ.3ರಷ್ಟು ಹೆಚ್ಚುವರಿ ಬಡ್ಡಿ ಸಹಾಯಧನವನ್ನು ಒದಗಿಸಲಾಗುತ್ತದೆ.<br>• **ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳ ನಿಯುಕ್ತಿ ಉಪ ಘಟಕದಡಿ:** ನಗರದ ಬಡ ನಿರುದ್ಯೋಗಿ ಯುವಕ /ಯುವತಿಯರಿಗೆ ವಿವಿಧ ಕೌಶಲ್ಯ ತರಬೇತಿಗಳನ್ನು ನೀಡಲಾಗುತ್ತದೆ, ತರಬೇತಿ ಪೂರ್ಣಗೊಳಿಸಿದ ಶೇ.70ರಷ್ಟು ಮಂದಿಗೆ ವೇತನಾಧಾರಿತ ಉದ್ಯೋಗ ಅಥವಾ ಸ್ವ-ಉದ್ಯೋಗ ಕಲ್ಪಿಸಲಾಗುತ್ತದೆ. ನೀಡಲಾಗುವ ತರಬೇತಿಗಳಲ್ಲಿ ಶೇ.33 ರಷ್ಟು ಮಹಿಳೆಯರಿಗೆ ಅವಕಾಶ ಕಲ್ಪಿಸಲು ಮೀಸಲಿರಿಸಿದೆ.<br>• **ಸ್ವಯಂ ಉದ್ಯೋಗ ಕಾರ್ಯಕ್ರಮ:** ಉಪಘಟಕದಡಿ ವೈಯಕ್ತಿಕ ಸ್ವಯಂ ಉದ್ಯೋಗ ಕೈಗೊಳ್ಳಲು ಸಾಲ ಮತ್ತು ಸಹಾಯಧನ ಸೌಲಭ್ಯಕ್ಕಾಗಿ ಬ್ಯಾಂಕಿನಿಂದ ರೂ.2.00 ಲಕ್ಷಗಳವರೆಗೆ ಮತ್ತು ಗುಂಪು ಉದ್ದಿಮೆ ಸ್ಥಾಪನೆಗಾಗಿ ರೂ.10.00 ಲಕ್ಷಗಳವರೆಗೆ ಸಾಲ ನೀಡಿ ಶೇ.7.00ಕ್ಕಿಂತ ಹೆಚ್ಚಿನ ಬಡ್ಡಿ ಮೊತ್ತಕ್ಕೆ ಬಡ್ಡಿ ಸಹಾಯಧನವನ್ನು ನೀಡಲಾಗುತ್ತದೆ. ನೀಡಲಾಗುವ ಸಾಲ ಸೌಲಭ್ಯಗಳನ್ನು ಹಾಗೂ ಸಬ್ಸಿಡಿಗಳಲ್ಲಿ ಶೇ.33 ರಷ್ಟು ಮಹಿಳೆಯರಿಗೆ ಅವಕಾಶ ಕಲ್ಪಿಸಲು ಮೀಸಲಿರಿಸಿದೆ. |

**3) ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (ಎನ್.ಆರ್.ಎಲ್.ಎಂ)**

ಡಿಡ್ಡಿಯುಜಿಕೆವೈ ಯೋಜನೆಯಡಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.

- ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಯೋಜನಾ ಅನುಷ್ಠಾನ ಸಂಸ್ಥೆಗಳನ್ನು (Project Implementing Agency –PIA) ನೇಮಕ ಮಾಡಿಕೊಂಡು ತರಬೇತಿ ನೀಡುವುದರ ಮೂಲಕ ಉದ್ಯೋಗವಕಾಶವನ್ನು ಕಲ್ಪಿಸಲಾಗುತ್ತಿದೆ.
- ಸ್ವ–ಸಹಾಯ ಗುಂಪುಗಳ ಮೂಲಕ ಫಲಾನುಭವಿಗಳಿಗೆ ಆದಾಯೋತ್ಪನ್ನ ಚಟುವಟಿಕೆ ಕೈಗೊಳ್ಳಲು ಪ್ರತಿ ಪರಿಶಿಷ್ಟ ಜಾತಿ/ಪಂಗಡದ ಸ್ವ–ಸಹಾಯ ಗುಂಪಿಗೆ ರೂ.1,25,000/– ಹಾಗೂ ಇತರ ಸ್ವ–ಸಹಾಯ ಗುಂಪಿಗೆ ರೂ.75,000/–ಗಳ ಸಮುದಾಯ ಬಂಡವಾಳ ನಿಧಿಯನ್ನು ಹಂಚಿ ಸ್ವಯಂ ಉದ್ಯೋಗಕ್ಕೆ ಅನುವು ಮಾಡಿಕೊಡುವುದು.
- ಅರ್ಹ ಸ್ವ–ಸಹಾಯ ಗುಂಪುಗಳನ್ನು ಗುರುತಿಸಿ ಪ್ರತಿ ಸಂಘಗಳಿಗೆ ರೂ.15000/– ರಂತೆ ಸುತ್ತು ನಿಧಿಯನ್ನು ನೀಡಿ ಬ್ಯಾಂಕ್‌ಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಸಾಲ ಪಡೆಯಲು ಸಹಕಾರಿಯಾಗಿದೆ.
- **ಗ್ರಾಮೀಣ ಸ್ವ ಉದ್ದಿಮೆ ತರಬೇತಿ ಕೇಂದ್ರಗಳು (ಆರ್‌ಸೆಟಿ):** ಗ್ರಾಮೀಣ ಪ್ರದೇಶದಲ್ಲಿ ನಿರುದ್ಯೋಗಿ ಯುವಕ ಯುವತಿಯರಿಗೆ ಸ್ವ ಉದ್ಯೋಗ ಕುರಿತು ರಾಜ್ಯದಲ್ಲಿನ 29 ಜಿಲ್ಲೆಗಳಲ್ಲಿನ 33 ಕೇಂದ್ರಗಳ ಮೂಲಕ ವಿವಿಧ ಕೌಶಲ್ಯಗಳಲ್ಲಿ ತರಬೇತಿಯನ್ನು ನೀಡಲಾಗುತ್ತಿದೆ.

**4) ಉದ್ಯಮಶೀಲತಾಭಿವೃದ್ಧಿ ಕೇಂದ್ರ (ಸಿಡಾಕ್)**

- ಉದ್ಯಮಶೀಲತಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸಿ ಸ್ವಂತ ಉದ್ಯೋಗ ಪ್ರಾರಂಭಿಸಲು ವಿವಿಧ ಸರ್ಕಾರಿ ಯೋಜನೆಗಳ ಬಗ್ಗೆ ಮಾಹಿತಿ ನೀಡಲಾಗುತ್ತದೆ.
- ಸ್ವಂತ ಉದ್ಯೋಗ ಪ್ರಾರಂಭಿಸಲು ಆಸಕ್ತಿಯುಳ್ಳವರಿಗೆ ಉದ್ಯಮಶೀಲತಾಭಿವೃದ್ಧಿ ತರಬೇತಿ ನೀಡಿ ಸ್ವಂತ ಉದ್ಯೋಗ ಪ್ರಾರಂಭಿಸಲು ಪ್ರೇರೆಪಿಸಲಾಗುತ್ತದೆ.

**ಸಂಖ್ಯೆ: ಕೌಉಜೀಇ 4 ಉಜೀಪ್ರ 2020**

(ಡಾ॥ ಸಿ.ಎನ್. ಅಶ್ವಥ್‌ನಾರಾಯಣ)
ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ,
ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು.